# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1370 |
| ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 16.03.2021 |
| ಉತ್ತರಿಸುವ ಸಚಿವರು | : | ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಉಡುಪಿ ಜಿಲ್ಲಾ ಗ್ರಾಹಕ ವ್ಯಾಜ್ಯಗಳ ಪರಿಹಾರ ಆಯೋಗದ ಕಟ್ಟಡವನ್ನು ಯಾವಾಗ ನಿರ್ಮಿಸಲಾಗಿದೆ; ಕಾಮಗಾರಿಯನ್ನು ಕೈಗೊಂಡ ಇಲಾಖೆ ಯಾವುದು; ಗುತ್ತಿಗೆದಾರರ ಹೆಸರು ಮತ್ತು ವಿಳಾಸ ನೀಡುವುದು; ಈ ಕಟ್ಟಡದ ನಿರ್ಮಾಣಕ್ಕೆ ತಗುಲಿದ ವೆಚ್ಚವೆಷ್ಟು; ಸದರಿ ಕಟ್ಟಡವನ್ನು ಯಾವ ಇಲಾಖೆಯಿಂದ ನಿರ್ವಹಣೆ ಮಾಡಲಾಗುತ್ತಿದೆ;(ಮಾಹಿತಿ ಒದಗಿಸುವುದು) | ಉಡುಪಿ ಜಿಲ್ಲಾ ಗ್ರಾಹಕರ ಆಯೋಗ ಕಟ್ಟಡದ ಕಾಮಗಾರಿಯನ್ನು ಅನುಮೋದಿತ ಅಂದಾಜು ಪಟ್ಟಿ 2007-08ರಂತೆ ಕೈಗೊಂಡಿದ್ದು, ನೆಲ ಅಂತಸ್ತು ಕಾಮಗಾರಿಯನ್ನು ಪೂರೈಸಿ, ದಿನಾಂಕ:05.10.2009ರಿಂದ ಕಾರ್ಯಾರಂಭಗೊಂಡಿದೆ.<br><br>ಸದರಿ ಕಾಮಗಾರಿಯನ್ನು ಕರ್ನಾಟಕ ರೂರಲ್ ಇನ್ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್, (KRIDL), ಮಂಗಳೂರು/ಉಡುಪಿ ವಿಭಾಗ (ಹಿಂದಿನ ಕರ್ನಾಟಕ ಭೂಸೇನಾ ನಿಗಮ ನಿಯಮಿತ) ವತಿಯಿಂದ ನಿರ್ಮಾಣ ಮಾಡಲಾಗಿದೆ. ಹಾಗೂ ಸ್ವತಃ ಸಂಸ್ಥೆಯ ವತಿಯಿಂದ (KRIDL), ಮಂಗಳೂರು – ಉಡುಪಿ, ವಿಭಾಗರವರೇ ಗುತ್ತಿಗೆದಾರರಾಗಿ ಕಾಮಗಾರಿ ಮೇಲ್ವಿಚಾರಣೆ ವಹಿಸಿಕೊಂಡು ಕಾರ್ಮಿಕರ ಮುಖಾಂತರ ಕಟ್ಟಡ ನಿರ್ಮಾಣ ಸಾಮಗ್ರಿಗಳನ್ನು ಒದಗಿಸಿ ನಿರ್ಮಿಸಿರುತ್ತಾರೆ. ಆ ಸಮಯದಲ್ಲಿ ಸದರಿ ಸಂಸ್ಥೆಯ ವತಿಯಿಂದ ಆಗಿನ ಸಹಾಯಕ ನಿರ್ದೇಶಕರ ಮೇಲ್ವಿಚಾರಣೆ ವಹಿಸಿರುತ್ತಾರೆಂದು ಸಂಬಂಧಿಸಿದ (KRIDL), ಇವರು ಮಾಹಿತಿ ನೀಡಿರುತ್ತಾರೆ.<br><br>ಈ ಕಟ್ಟಡ ನಿರ್ಮಾಣಕ್ಕೆ ಕೇಂದ್ರ ಸರ್ಕಾರದ IPCP ಯೋಜನೆಯಡಿಯಲ್ಲಿ ರೂ.36,96,000/-ಗಳ ಬಿಡುಗಡೆಯಾಗಿರುತ್ತದೆ. ಸದರಿ ಕಟ್ಟಡವು ಅಪೂರ್ಣಗೊಂಡಿದ್ದು, ಜಿಲ್ಲಾ ಗ್ರಾಹಕರ ಆಯೋಗದ ಮೇಲ್ವಿಚಾರಣೆ ಮತ್ತು ನಿರ್ವಹಣೆಯಲ್ಲಿರುತ್ತದೆ. |

| | | |
|---|---|---|
| (ಆ) | ಸದರಿ ಕಟ್ಟಡದ ಮೊದಲ ಮಹಡಿಯ ಕಾಮಗಾರಿಯ ಕಟ್ಟಡವನ್ನು ಯಾವಾಗ ನಿರ್ಮಿಸಲಾಗಿದೆ; ಕಾಮಗಾರಿಯನ್ನು ಕೈಗೊಂಡ ಇಲಾಖೆ ಯಾವುದು; ಗುತ್ತಿಗೆದಾರರ ಹೆಸರು ಮತ್ತು ವಿಳಾಸ ನೀಡುವುದು; ಈ ಮೊದಲ ಮಹಡಿಯ ಕಟ್ಟಡ ನಿರ್ಮಾಣಕ್ಕೆ ಬಿಡುಗಡೆಯಾದ ಅನುದಾನದ ಮೊತ್ತ ಮತ್ತು ಬಳಕೆಯಾದ ಮೊತ್ತವೆಷ್ಟು; (ವಿವರ ಒದಗಿಸುವುದು) | ಸದರಿ ಕಟ್ಟಡದ ಮೊದಲ ಮಹಡಿ ಕಾಮಗಾರಿ 2009 ಇಸವಿಯಲ್ಲಿ ಪ್ರಾರಂಭಿಸಿದ್ದು, ಅನುದಾನ ಕೊರತೆಯ ಕಾರಣ ಕಟ್ಟಡ ಅಪೂರ್ಣಗೊಂಡಿದೆ.<br><br>ಕರ್ನಾಟಕ ರೂರಲ್ ಇನ್ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಟ್, (KRIDL), ಮಂಗಳೂರು/ಉಡುಪಿ ವಿಭಾಗ (ಹಿಂದಿನ ಕರ್ನಾಟಕ ಭೂಸೇನಾ ನಿಗಮ ನಿಯಮಿತ)<br><br>ಮೇಲೆ ವಿವರಿಸಿದಂತೆ ಸ್ವತಃ ಸಂಸ್ಥೆಯ ವತಿಯಿಂದ ನಿರ್ಮಾಣ ಮಾಡಿರುವುದರಿಂದ ಗುತ್ತಿಗೆದಾರರು ಯಾರು ಇರುವುದಿಲ್ಲ.<br><br>ನೆಲಮಹಡಿ ಹಾಗೂ ಮೊದಲ ಮಹಡಿಗೆ ಒಟ್ಟು ಬಿಡುಗಡೆಯಾದ ಅನುದಾನ ರೂ.39,96,000/-ಗಳಾಗಿರುತ್ತದೆ. ಅದರ ಬಳಕೆಯಾದ ಬಗ್ಗೆ ಈಗಾಗಲೇ ಕೇಂದ್ರ ಸರ್ಕಾರಕ್ಕೆ ದಿನಾಂಕ:05.10.2015ರಂದು ಉಪಯೋಗಿತ ಪ್ರಮಾಣ ಪತ್ರವನ್ನು ನೀಡಲಾಗಿರುತ್ತದೆ. |
| (ಇ) | ಸದರಿ ಕಟ್ಟಡದ ಮೊದಲ ಮಹಡಿ ನಿರ್ಮಾಣ ಕಾಮಗಾರಿ ಸಂಪೂರ್ಣಗೊಳ್ಳದಿರುವುದರಿಂದ ಆಯೋಗದ ಅಧ್ಯಕ್ಷರು, ಸದಸ್ಯರು, ಸಿಬ್ಬಂದಿ ವರ್ಗ, ಪಕ್ಷಗಾರರು ಮತ್ತು ವಕೀಲರಿಗೆ ಸ್ಥಳಾವಕಾಶದ ಕೊರತೆ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಕೈಗೊಂಡ ಕ್ರಮವೇನು; ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? | ಅಪೂರ್ಣಗೊಂಡ ಕಟ್ಟಡ ಮತ್ತು ಇತರ ದುರಸ್ತಿ ಕಾಮಗಾರಿಗಳನ್ನು ಒಳಗೊಂಡಂತೆ ಹಾಗೂ ಮಧ್ಯಸ್ಥಿಕೆಗಾರಿಕೆ ಕೇಂದ್ರದ ಕಟ್ಟಡ ಸೇರಿ ಅಂದಾಜುಪಟ್ಟಿಯನ್ನು IPCP ಯೋಜನೆಯಡಿಯಲ್ಲಿ ಮೂಲ ಸೌಕರ್ಯಗಳನ್ನು ಒದಗಿಸಲು ಅನುದಾನ ಮಂಜೂರು ಮಾಡುವಂತೆ ಕೋರಿ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿಕೊಡಲು ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಆನಾಸ 19 ಸಲಫ 2021 (ಇ-ಆಫೀಸ್)

(ಉಮೇಶ್ ವಿ. ಕತ್ತಿ)
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು